# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ — 271
2) ಸದಸ್ಯರ ಹೆಸರು — ಶ್ರೀ ಎಸ್.ಎಲ್.ಬೋಜೇಗೌಡ (ಶಿಕ್ಷಕರ ಕ್ಷೇತ್ರ)
3) ಉತ್ತರಿಸಬೇಕಾದ ದಿನಾಂಕ — 09-12-2020.
4) ಉತ್ತರಿಸಬೇಕಾದ ಸಚಿವರು — ಮಾನ್ಯ ಹಿಂದೂ ಧಾರ್ಮಿಕ ಮತ್ತು ಧರ್ಮರಾಯ ದತ್ತಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಉತ್ತರ ಕನ್ನಡ ಜಿಲ್ಲೆ ಅಂಕೋಲಾದಲ್ಲಿನ ಬೇಲಿಕೇರಿ ಬಂದರು ಪ್ರದೇಶದಲ್ಲಿ ನಿರ್ವಹಣೆ ಕೊರತೆಯಿಂದಾಗಿ ಫ್ಲಾಟ್ ಫಾರ್ಮ್ ಇಲ್ಲದೇ ಮಹಿಳೆಯರು ಮೀನು ಒಣಗಿಸಲಾಗದೆ ಪ್ರತಿನಿತ್ಯ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಈ ಬಂದರು ನಿರ್ವಹಣೆಗೆ ಸರ್ಕಾರ ತೆಗೆದುಕೊಂಡ ಕ್ರಮವೇನು; | ಬೇಲಿಕೇರಿ ಮೀನುಗಾರರ ಮಹಿಳೆಯರು ಬಂದರಿನಲ್ಲಿ ಮೀನು ಒಣಗಿಸುವ ಕಟ್ಟೆ, ಶೌಚಾಲಯ, ಸ್ನಾನಗೃಹ ನಿರ್ಮಾಣ ಮತ್ತು ಅವುಗಳ ಅಗತ್ಯತೆ ಬಗ್ಗೆ ಅಧ್ಯಯನ ನಡೆಸಿ ವರದಿಯನ್ನು ಪಡೆಯಲು ಸೂಕ್ತ ಕ್ರಮ ವಹಿಸಲಾಗುತ್ತಿದೆ. |
| ಇ) | ಲಾಕ್ ಡೌನ್ ಸಮಯದಲ್ಲಿ ಮೀನುಗಾರರ ರಕ್ಷಣೆ ಮಾಡಬೇಕಾದದ್ದು ಸರ್ಕಾರದ ಕರ್ತವ್ಯ ವಾಗಿದ್ದು, ಅವರ ಜೀವನ ನಿರ್ವಹಣೆಗೆ ಸರ್ಕಾರದ ಮಟ್ಟದಲ್ಲಿ ಕೈಗೊಂಡ ಕ್ರಮಗಳೇನು; | ಕೊರೋನಾ ವೈರಸ್ ಹರಡುವಿಕೆಯಿಂದ ಜಾರಿಯಲ್ಲಿದ್ದ ಲಾಕ್ ಡೌನ್ ಅವಧಿಯಲ್ಲಿ ಮೀನುಗಾರಿಕೆಗೆ ಸಂಬಂಧಿಸಿದಂತೆ ದಿನಾಂಕ: 24-03-2020 ರಿಂದ 14-04-2020 ರವರೆಗೆ ಮಾತ್ರ ಜಾರಿ ಮಾಡಲಾಗಿರುತ್ತದೆ.<br>ಈ ಅವಧಿಯ ನಂತರ ಮೀನುಗಾರರ ಅನುಕೂಲಕ್ಕಾಗಿ ಸರ್ಕಾರ ಕೈಗೊಂಡ ಕ್ರಮಗಳು ಈ ಕೆಳಕಂಡಂತಿವೆ:-<br>• ದಿನಾಂಕ: 15-04-2020 ರಿಂದ ಸಾಂಪ್ರದಾಯಿಕ ಹಾಗೂ ಮೋಟರೀಕೃತ (10 ಹೆಚ್.ಪಿ.) ದೋಣಿಗಳು ಮೀನುಗಾರಿಕೆ ಪ್ರಾರಂಭಿಸಲು ಅನುಮತಿ ನೀಡಲಾಗಿರುತ್ತದೆ.<br>• ಮುಂದುವರೆದು, ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ಪ್ರಕಾರ ಸಾಮಾಜಿಕ ಅಂತರವನ್ನು ಅನುಸರಿಸಿ ಮೀನುಗಾರಿಕೆ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಅವಕಾಶ ಮಾಡಿಕೊಡಲಾಗಿದೆ. |

| | | |
|---|---|---|
| | | • ಮೀನು ವ್ಯಾಪಾರ ಮತ್ತು ಮೀನು ಸಾಗಾಣಿಕೆಯಲ್ಲಿ ತೊಡಗಿರುವ ವಾಹನಗಳ ಸಂಚಾರಕ್ಕೆ ನಿರ್ಬಂಧಗಳನ್ನು ಸಡಿಲಿಸಲಾಗಿರುತ್ತದೆ.<br><br>ಇದಲ್ಲದೆ ಕೆರೆ ಮೀನುಗಾರಿಕೆಯಲ್ಲಿ ತೊಡಗಿರುವವರಿಗೆ<br><br>• 2020-21 ನೇ ಸಾಲಿನಲ್ಲಿ ಕೆರೆಯ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಅವಧಿ ಮುಕ್ತಾಯವಾಗಿರುವ ಕೆರೆಗಳನ್ನು ಪಾವತಿಸಹಿತ ಒಂದು ವರ್ಷದ ಅವಧಿಗೆ ಮುಂದುವರೆಸಲು ಆದೇಶಿಸಿದೆ.<br><br>• ಕೋವಿಡ್-19 ಲಾಕ್ ಡೌನ್ ಅವಧಿಯಲ್ಲಿ ಉಂಟಾದ ಆರ್ಥಿಕ ತೊಂದರೆಗಳನ್ನು ಪರಿಗಣಿಸಿ, ರೈತರಿಗೆ ಕೆರೆಯ ಮೀನು ಪಾಶುವಾರು ಹಕ್ಕನ್ನು ನವೀಕರಿಸಲು 2 ತಿಂಗಳ ವಿಸ್ತರಣೆ ನೀಡಲಾಗಿದೆ. |
| ಈ) | ಮೀನುಗಾರರು ಈ ಕ್ಲಿಷ್ಟಕರ ಸನ್ನಿವೇಶವಾದ ಕೋವಿಡ್-19ರ ಸಮಯದಲ್ಲಿ ಉದ್ಯೋಗವಿಲ್ಲದೇ ಕಷ್ಟಪಡುತ್ತಿದ್ದು, ಇವರಿಗೆ ಉದ್ಯೋಗ ಭದ್ರತೆ ನೀಡುವಲ್ಲಿ ಸರ್ಕಾರವು ಕ್ರಮವಹಿಸಿದೆಯೇ; ಹಾಗಿದ್ದಲ್ಲಿ, ಯಾವರೀತಿ ಕ್ರಮ ಕೈಗೊಳ್ಳಲಾಗಿದೆ? (ಪೂರ್ಣ ಮಾಹಿತಿ ನೀಡುವುದು) | ಮೀನುಗಾರರು ಈ ಕ್ಲಿಷ್ಟಕರ ಸನ್ನಿವೇಶವಾದ ಕೋವಿಡ್-19 ಸಮಯದಲ್ಲಿ ಅವರಿಗೆ ಅನುಕೂಲವಾಗುವಂತೆ ಮೇಲೆ ಹೇಳಲಾದ ಕ್ರಮಗಳ ಜೊತೆಗೆ (ಪ್ರಶ್ನೆ "ಇ") ಈ ಕೆಳಕಂಡ ಕ್ರಮ ವಹಿಸಲಾಗಿರುತ್ತದೆ.<br><br>• ಕೇಂದ್ರ ಪುರಸ್ಕೃತ ಉಳಿತಾಯ ಮತ್ತು ಪರಿಹಾರ ಯೋಜನೆ ಅಡಿ 2020-21ನೇ ಸಾಲಿನಲ್ಲಿ 26,422 ಮೀನುಗಾರರಿಗೆ ಇಲ್ಲಿಯವರೆಗೆ ತಲಾ ರೂ.3000/- ರಂತೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಪಾಲಿನ ಅನುದಾನ ಬಿಡುಗಡೆ ಮಾಡಿ ಬಿ.ಎಮ್.ಎಸ್ ತಂತ್ರಾಂಶದ ಮುಖಾಂತರ ಫಲಾನುಭವಿಗಳ ಖಾತೆಗೆ ಹಣ ಪಾವತಿಸಲಾಗಿರುತ್ತದೆ.<br><br>• ಕಿಸಾನ್ ಕ್ರೆಡಿಟ್ ಕಾರ್ಡ್ (ಕೆ.ಸಿ.ಸಿ.) ವಿತರಣೆ ಹಾಗೂ<br><br>• ಶೂನ್ಯ ಬಡ್ಡಿದರದಲ್ಲಿ ಸಾಲ ಸೌಲಭ್ಯವನ್ನು ನೀಡಲು ಕ್ರಮಕೈಗೊಳ್ಳಲಾಗಿರುತ್ತದೆ. |

ಸಂಖ್ಯೆ: ಪಸಂಮೀ ಇ-240 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮರಾಯ ದತ್ತಿ,
ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು
ಜಲಸಾರಿಗೆ ಸಚಿವರು